

# ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 1281 (1429)<br>(ಸಣ್ಣ ನೀರಾವರಿ ಇಲಾಖೆಯಿಂದ ವರ್ಗಾವಣೆಗೊಂಡ ಪ್ರಶ್ನೆ) |
| ಸದಸ್ಯರ ಹೆಸರು : | ಶ್ರೀ ವಿಜಯ ಸಿಂಗ್<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ : | 23-09-2021 |
| ಉತ್ತರಿಸುವವರು : | ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಕೊಳವೆ ಭಾವಿ ಕೊರೆಯುವ ಪರವಾನಿಗೆ ನೀಡುವ ಬಗ್ಗೆ ನಗರಸಭೆ ಕೈಗೊಂಡಿರುವ ನಿಯಮ ಮತ್ತು ನಿರ್ಧಾರಗಳೇನು; | ಬೀದರ್ ನಗರಸಭೆ ವ್ಯಾಪ್ತಿಯಲ್ಲಿ ಕೊಳವೆ ಬಾವಿಗಳನ್ನು ಕೊರೆಯಲು ಅನುಮತಿ ನೀಡುವ ಕುರಿತು ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ ರವರ ಆದೇಶ ಸಂಖ್ಯೆ: ಎಂಎಯುಎನ್/ವಿವಿಧ/ಸಿಆರ್/2020-21/1666 ದಿನಾಂಕ:09-03-2021. ಆದೇಶದಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗುತ್ತಿರುತ್ತದೆ.<br>1) ಹೊಸ ಬೋರ್‌ವೆಲ್ ಕೊರೆಯಲು ಪೌರಾಯುಕ್ತರು ನಗರಸಭೆ ಬೀದರ್ ರವರು ಅನುಮತಿ ನೀಡಬೇಕಿರುತ್ತದೆ.<br>2) ಅರ್ಜಿ ಶುಲ್ಕ ರೂ. 5000 ವಿಧಿಸುವುದು.<br>3) ಬೋರ್‌ವೆಲ್ ಕೊರೆಯಲು ನಿಷೇಧಿತ ಪ್ರದೇಶಗಳು<br>ಅ) ಗುರುನಾನಕ್ ಝೀರಾದಿಂದ 0.50 ಕಿ.ಮೀ<br>ಆ) ನರಸಿಂಗ ಝರಣಾದಿಂದ 0.50 ಕಿ.ಮೀ<br>ಇ) ಪಾಪನಾಶ ಕೆರೆಯಿಂದ 0.50 ಕಿ.ಮೀ<br>4) ಅನುಮತಿ ನೀಡಲು ನಿಗಧಿತ ಅವಧಿ 20 ದಿನಗಳು, 20 ದಿನಗಳಲ್ಲಿ ಅನುಮತಿ ದೊರೆಯದಿದ್ದಲ್ಲಿ, 21ನೇ ದಿನ ಅನುಮತಿ ನೀಡಿದಂತೆ ಪರಿಗಣಿಸುವುದು.<br>5) ಬೋರ್‌ವೆಲ್ ಅನುಮತಿ ಆಧಾರದ ಮೇಲೆ ಸಂಗ್ರಹಿಸಿ ಹಣವನ್ನು ಕಡ್ಡಾಯವಾಗಿ ಮಳೆ ನೀರು ಕೊಯ್ಲಿಗೆ ಬಳಸುವುದು.<br>6) ಅರ್ಜಿಯೊಂದಿಗೆ ಕಡ್ಡಾಯವಾಗಿ ಸದರಿ ಜಾಗದ ದಾಖಲಾತಿಗಳನ್ನು ಸಲ್ಲಿಸುವುದು.<br>7) ನಗರಾಭಿವೃದ್ಧಿ ಪ್ರಾಧಿಕಾರದಿಂದ ಕೃಷಿಯೇತರ ಭೂಮಿಗೆ (ಎನ್.ಎ ಬೂಡಾ) ಅನುಮೋದನೆ ನೀಡಿದ ಜಾಗಗಳಿಗೆ ಮಾತ್ರ ಅನುಮತಿ ನೀಡುವುದು.<br>8) ಈಗಾಗಲೇ ಸದರಿ ಪ್ಲಾಟ್‌ನಲ್ಲಿ ಬೋರ್‌ವೆಲ್/ಬಾವಿ ಇದ್ದಲ್ಲಿ ಪರಿಶೀಲಿಸಿ ಅನುಮತಿ ನೀಡುವುದು.<br>9) ಹೊಸದಾಗಿ ಕೊರೆಯುವ ಬೋರ್‌ವೆಲ್‌ಗೆ |

| | | |
|---|---|---|
| | | ಕಡ್ಡಾಯವಾಗಿ ಮಳೆ ನೀರು ಕೊಯ್ಲು (Recharge System) ಅಳವಡಿಸುವುದು. ಸದರಿ ಪ್ಲಾಟ್ ಮೇಲೆ ಬಿದ್ದ ಮಳೆ ನೀರನ್ನು ಬೋರ್‌ವೆಲ್‌ಗೆ ಸೇರುವಂತೆ ಮಾಡುವುದು.<br>10) ನಗರಸಭೆಗೆ ಪಾವತಿಸಬೇಕಾದ ಎಲ್ಲಾ ಶುಲ್ಕ/ತೆರಿಗೆಗಳನ್ನು ಕಡ್ಡಾಯವಾಗಿ ಅರ್ಜಿ ಸಲ್ಲಿಸುವ ಮೊದಲು ಪಾವತಿಸತಕ್ಕದ್ದು.<br>11) 24x7 ನೀರು ಸರಬರಾಜು ವ್ಯವಸ್ಥೆ ಇರದ ಪ್ರದೇಶಗಳಲ್ಲಿ (ವಾರ್ಡ್) ಬೋರ್‌ವೆಲ್ ಕೊರೆಯಲು ಅನುಮತಿ ನೀಡಲು ಒಪ್ಪಬಹುದು.<br>ಕೊಳವೆ ಬಾವಿ ಕೊರೆಯಲು ಭೌತಿಕವಾಗಿ ಪರಿಶೀಲಿಸಿ ಸಹಾಯಕ ಕಾರ್ಯಪಾಲಕ ಅಭಿಯಂತರರ ವರದಿ ಮೇರೆಗೆ ಆದೇಶ ಜಾರಿ ಮಾಡಲಾಗುತ್ತಿದೆ. |
| ಆ | ಕೊಳವೆ ಭಾವಿ ಕೊರೆಯುವ ಪರವಾನಿಗೆ ನೀಡುವುದು ಪರಿಸರ ಇಲಾಖೆಯ ಮಾನದಂಡಗಳಿಗೆ ಅನುಗುಣವಾಗಿದೆಯೇ; | ಜಿಲ್ಲಾಧಿಕಾರಿಗಳು, ಬೀದರ್ ರವರ ಆದೇಶ ಸಂ: ಸಂಖ್ಯೆ:ಎಂಯುಎನ್/ವಿವಿಧ/ಸಿಆರ್/2020-21/1666 ದಿನಾಂಕ:09-03-2021ರಂತೆ ಕ್ರಮವಹಿಸಲಾಗುತ್ತಿದೆ. |
| ಇ | ಬೀದರ್ ನಗರಸಭೆಯಿಂದ ಕಳೆದ ಒಂದು ವರ್ಷಗಳಲ್ಲಿ ಕೊಳವೆ ಭಾವಿ ಕೊರೆಯಲು ಪರವಾನಿಗೆ ನೀಡಲಾಗಿದೆಯೇ; ಪರವಾನಿಗೆ ನೀಡಿರುವ ನಿವೇಶನ, ಸ್ಥಳಗಳು ನಿಯಮಾವಳಿಗಳಂತೆ ಕೃಷಿಯೇತರ ಭೂಮಿ, ಲೇಔಟ್ ಸೇರಿದಂತೆ ಮತ್ತಿತರ ಪರವಾನಿಗೆಯನ್ನು ಹೊಂದಿದೆಯೇ? | ಬೀದರ್ ನಗರಸಭೆಯಿಂದ ಕಳೆದ ಒಂದು ವರ್ಷದಲ್ಲಿ ಒಟ್ಟು 321 ಕೊಳವೆ ಬಾವಿಗಳನ್ನು ಕೊರೆಯಲು ಅನುಮತಿ ನೀಡಲಾಗಿರುತ್ತದೆ. ಜಿಲ್ಲಾಧಿಕಾರಿಗಳ ಆದೇಶದಲ್ಲಿನ ಎಲ್ಲಾ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗುತ್ತಿದೆ. |

**ಸಂಖ್ಯೆ: ನಅಇ 220 ಜಿಇಎಲ್ 2021(ಇ)**

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ, ಸಣ್ಣ ಕೈಗಾರಿಕೆಗಳ ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು